# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 869

ಸದಸ್ಯರ ಹೆಸರು : ಡಾ॥ ತೇಜಸ್ವಿನಿ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 20.12.2021

ಉತ್ತರಿಸುವ ಸಚಿವರು : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಬಹುತೇಕ ಪಂಚಾಯತಿಗಳಲ್ಲಿ ಬೀದಿ ದೀಪಗಳ ವಿದ್ಯುತ್ ಬಿಲ್ ಕಟ್ಟದೆ ಸಂಕಷ್ಟ ಎದುರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಅಕ್ಟೋಬರ್ 2021ರ ಅಂತ್ಯಕ್ಕೆ ಪಂಚಾಯಿತಿ ಬೀದಿ ದೀಪಗಳ ವಿದ್ಯುತ್ ಬಿಲ್ ಬಾಕಿ ಇರುವ ಕಂಪನಿವಾರು ವಿವರಗಳು ಈ ಕೆಳಕಂಡಂತಿದೆ:– (ಕೆಳಗಿನ ಕೋಷ್ಟಕ ನೋಡಿ) |
| ಆ) | ಪರಿಸರಕ್ಕೆ ಪೂರಕವಾಗಿ ನಿಸರ್ಗದಲ್ಲಿ ದೊರೆಯುವ ಸೌರಶಕ್ತಿ ದೀಪಗಳನ್ನು ವ್ಯಾಪಕವಾಗಿ ಬಳಸಲು ಗ್ರಾಮದ ಬೀದಿದೀಪ ಹಾಗೂ ನಿವಾಸಿಗಳಿಗೆ ಅತ್ಯಂತ ಕಡಿಮೆ ವೆಚ್ಚದಲ್ಲಿ 'ಸೌರಶಕ್ತಿ' ಗ್ರಾಹಕ ದೀಪ ವ್ಯವಸ್ಥೆ ಕಲ್ಪಿಸುವ ಇಚ್ಛೆ–ಯೋಜನೆ ಇದೆಯೇ; | 'ಸೌರಶಕ್ತಿ' ದೀಪಗಳನ್ನು ಗ್ರಾಮದ ಬೀದಿ ದೀಪಗಳಿಗೆ ಅಳವಡಿಸುವ ವಿಷಯವು ಸಂಬಂಧಿಸಿದ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಒಳಪಟ್ಟಿರುತ್ತದೆ. "ಸೌರಶಕ್ತಿ" ಬೀದಿ ದೀಪಗಳ ಸಂಬಂಧಪಟ್ಟಂತೆ, ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಯಾವುದೇ ಅಧ್ಯಯನ ನಡೆಸಿರುವುದಿಲ್ಲ.<br><br>ಗೃಹ ಬಳಕೆ ಗ್ರಾಹಕರು ತಮ್ಮ ಮನೆಗಳ ಮೇಲೆ ಸೌರ ಶಕ್ತಿ ವಿದ್ಯುತ್ ಮೇಲ್ಛಾವಣಿ ಘಟಕಗಳನ್ನು ಅಳವಡಿಸಿಕೊಳ್ಳಲು ಭಾರತ ಸರ್ಕಾರದ ಸೌರ ಗೃಹ ಯೋಜನೆ ಅಡಿಯಲ್ಲಿ 1 kW ಯಿಂದ 3 kW ವರೆಗೆ ಮಾನದಂಡ ವೆಚ್ಚದ ಶೇ 40% ಹಾಗೂ 3 kW ಯಿಂದ 10 kW ವರೆಗೆ ಮಾನದಂಡ ವೆಚ್ಚದ ಶೇಕಡಾ 20% ರಷ್ಟು ಅನುದಾನ ನೀಡುವ ಮೂಲಕ ಸೌರ ಶಕ್ತಿ ವಿದ್ಯುತ್ ಮೇಲ್ಛಾವಣಿ (ಸೋಲಾರ್ ರೂಫ್ ಟಾಪ್) ಘಟಕ ಪ್ರೋತ್ಸಾಹಿಸಲಾಗುತ್ತಿದೆ. ಅಲ್ಲದೆ ಸೌರ ಮೇಲ್ಛಾವಣಿ ಘಟಕಗಳನ್ನು ತಮ್ಮ ಮನೆಗಳ ಛಾವಣಿಗಳ ಮೇಲೆ ನಿಯಮಾನುಸಾರ ಅಳವಡಿಸಿಕೊಳ್ಳುವುದು ಗ್ರಾಹಕರ ಇಚ್ಛೆಗೆ ಒಳಪಟ್ಟಿರುತ್ತದೆ. |
| ಇ) | ಇದರಿಂದ ಇಲಾಖೆಯು ಎಷ್ಟು ಪ್ರಮಾಣದಲ್ಲಿ ವಿದ್ಯುತನ್ನು ಉಳಿಸಬಹುದಾಗಿದೆ; ಈ ಬಗ್ಗೆ ಅಧ್ಯಯನ ನಡೆಸಲಾಗಿದೆಯೇ; | |
| ಈ) | ಪ್ರತಿ ಸಾರ್ವಜನಿಕ ಸರ್ಕಾರಿ ಕಟ್ಟಡದ ಮೇಲ್ಛಾವಣಿಯ ಮೇಲೆ 'ಸೌರಫಲಕ' ಅಳವಡಿಸಿ 'ಇಂಧನ | ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಸರ್ಕಾರಿ ಕಟ್ಟಡಗಳ ಇಂಧನ ಸ್ವಾವಲಂಬನೆ ಸಾಧಿಸುವ ನಿಟ್ಟಿನಲ್ಲಿ ಸರ್ಕಾರಿ ಕಟ್ಟಡದ |

| ಕ್ರ ಸಂ. | ಕಂಪನಿ ಹೆಸರು | ಬಾಕಿ ರೂ. (ಕೋಟಿಗಳಲ್ಲಿ) |
|---|---|---|
| 1 | ಬೆಸ್ಕಾಂ | 300.94 |
| 2 | ಮೆಸ್ಕಾಂ | 15.01 |
| 3 | ಸೆಸ್ಕ್ | 69.27 |
| 4 | ಹೆಸ್ಕಾಂ | 38.44 |
| 5 | ಜೆಸ್ಕಾಂ | 421.45 |

| | | |
|---|---|---|
| | ಸ್ವಾವಲಂಬನೆ' ಸಾಧಿಸುವ ಪೂರಕ ಯೋಜನೆ ಇಲಾಖೆಯ ಮುಂದಿದೆಯೇ? (ವಿವರ ನೀಡುವುದು) | ಮೇಲ್ಛಾವಣಿ ಮೇಲೆ ಸೌರ ಫಲಕ ಅಳವಡಿಸಿರುವ ವಿವರಗಳು ಈ ಕೆಳಕಂಡಂತಿವೆ:- |

| ಕಂಪನಿ ಹೆಸರು | ಐಪಿಡಿಎಸ್ ಯೋಜನೆ | | 13ನೇ ಹಣಕಾಸು ಯೋಜನೆ | |
|---|---|---|---|---|
| | ಸೌರಶಕ್ತಿ ಘಟಕಗಳ ಸಂಖ್ಯೆ | ಸಾಮರ್ಥ್ಯ (ಕಿ.ವ್ಯಾ.ಗಳಲ್ಲಿ) | ಸೌರಶಕ್ತಿ ಘಟಕಗಳ ಸಂಖ್ಯೆ | ಸಾಮರ್ಥ್ಯ (ಕಿ.ವ್ಯಾ.ಗಳಲ್ಲಿ) |
| ಬೆಸ್ಕಾಂ | 51 | 673.56 | 34 | 3019 |
| ಮೆಸ್ಕಾಂ | 56 | 1351.44 | 56 | 817 |
| ಸೆಸ್ಕ್ | 774 | 2806 | 580 | 1850 |
| ಹೆಸ್ಕಾಂ | 233 | 1822 | 340 | 2882 |
| ಜೆಸ್ಕಾಂ | 77 | 1670 | 88 | 2442 |

ಬೆಸ್ಕಾಂ ವ್ಯಾಪ್ತಿಯಲ್ಲಿ ಸರ್ಕಾರಿ ಕಟ್ಟಡಗಳ ಮೇಲೆ 7.181 ಮೆ.ವ್ಯಾ. ಸಾಮರ್ಥ್ಯದ ಸೌರ ಶಕ್ತಿ ವಿದ್ಯುತ್ ಮೇಲ್ಛಾವಣಿ ಘಟಕ ಅಳವಡಿಸುವ ಕಾಮಗಾರಿ ಪ್ರಗತಿಯಲ್ಲಿರುತ್ತದೆ.

ಮೆಸ್ಕಾಂ ವ್ಯಾಪ್ತಿಯ ಉಡುಪಿ ವೃತ್ತದಲ್ಲಿ ಮೆಸ್ಕಾಂ ಕಟ್ಟಡಗಳ ಮೇಲೆ 24 ಘಟಕಗಳ 406 ಕಿ.ವ್ಯಾ. ಸಾಮರ್ಥ್ಯದ ಸೌರ ಶಕ್ತಿ ವಿದ್ಯುತ್ ಮೇಲ್ಛಾವಣಿ ಘಟಕ ಅಳವಡಿಸಲು ಟೆಂಡರ್ ಕಾರ್ಯ ಪ್ರಗತಿಯಲ್ಲಿರುತ್ತದೆ.

ಸಂಖ್ಯೆ: ಎನರ್ಜಿ 284 ಇಬಿಎಸ್ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು